

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 620 |
| ಮಾನ್ಯ ಸದಸ್ಯರ ಹೆಸರು | ಶ್ರೀಮತಿ ಪೂರ್ಣಿಮಾ ಕೆ. (ಹಿರಿಯೂರು) |
| ಉತ್ತರಿಸಬೇಕಾದ ದಿನಾಂಕ | 28.12.2022 |
| ಉತ್ತರಿಸುವ ಸಚಿವರು | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರವರ್ಗ-1ರಡಿಯಲ್ಲಿ ಬರುವ ವಿವಿಧ ಸಮುದಾಯದವರಿಗೆ ಶೈಕ್ಷಣಿಕ ಮೀಸಲಾತಿಯನ್ನು 1995 ರಿಂದ ನೀಡುತ್ತಿರುವುದು ನಿಜವೇ; ಇಲ್ಲದಿದ್ದಲ್ಲಿ ಕಾರಣಗಳೇನು; (ವಿವರಗಳನ್ನು ನೀಡುವುದು) | ಹೌದು |
| ಆ) | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗದ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಶೈಕ್ಷಣಿಕ ವಿನಾಯಿತಿಯನ್ನು ಪ್ರವರ್ಗ-1ರ ವಿದ್ಯಾರ್ಥಿಗಳಿಗೂ ನೀಡಲಾಗುತ್ತಿದೆಯೇ; | ಸರ್ಕಾರದ ಆದೇಶ ಸಂಖ್ಯೆ:ಹಿಂವಕ 429 ಬಿಎಂಎಸ್ 2014, ದಿನಾಂಕ:04.09.2014 ರ ಆದೇಶದಲ್ಲಿ ಪೂರ್ಣ ಶುಲ್ಕಗಳ ಪಾವತಿಯೊಂದಿಗೆ ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಕಾರ್ಯಕ್ರಮದಡಿ ಪ್ರವರ್ಗ-1 ರ ವಿದ್ಯಾರ್ಥಿಗಳಿಗೆ ವಿವಿಧ ಕೋರ್ಸ್‌ಗಳಲ್ಲಿ ಶೇ. 65ಕ್ಕಿಂತ ಕಡಿಮೆ ಅಂಕಗಳನ್ನು ಪಡೆದ ವಿದ್ಯಾರ್ಥಿಗಳಿಗೆ ಈ ಕೆಳಕಂಡ 5 ಶುಲ್ಕಗಳನ್ನು ಮರುಪಾವತಿ ಮಾಡಲಾಗುತ್ತಿದೆ.<br>1. ಭೋದನಾ ಶುಲ್ಕ<br>2. ಪ್ರಯೋಗಾಲಯ ಶುಲ್ಕ<br>3. ಪರೀಕ್ಷಾ ಶುಲ್ಕ<br>4. ಕ್ರೀಡಾ ಶುಲ್ಕ<br>5. ಗ್ರಂಥಾಲಯ ಶುಲ್ಕ<br>ಮುಂದುವರೆದು, ಶೇ. 65ಕ್ಕಿಂತ ಹೆಚ್ಚಿನ ಅಂಕಗಳನ್ನು ಪಡೆದ ವಿದ್ಯಾರ್ಥಿಗಳಿಗೆ ಈ ಮೇಲ್ಕಂಡ 5 ಶುಲ್ಕಗಳೊಂದಿಗೆ ವಿಶ್ವವಿದ್ಯಾಲಯ/ಶಿಕ್ಷಣ ಇಲಾಖೆಗಳು ಆಯಾ ಕೋರ್ಸ್‌ಗಳಿಗೆ ಸರ್ಕಾರಿ ಸಂಸ್ಥೆಗಳಿಗೆ ನಿಗದಿಪಡಿಸುವ ದರಗಳಲ್ಲಿ ಇತರೆ ಪೂರ್ಣ ಶುಲ್ಕಗಳನ್ನು ಪಾವತಿಸಿ ಅವರ ಶಿಕ್ಷಣವನ್ನು ಮುಂದುವರೆಸಲು ಆದೇಶಿಸಲಾಗಿರುತ್ತದೆ. ಅದರಂತೆ, ಶುಲ್ಕಗಳನ್ನು ಪಾವತಿಸಲಾಗುತ್ತಿದೆ. |
| ಇ) | ಇಲ್ಲದಿದ್ದಲ್ಲಿ ಕಾರಣವೇನು? (ಸಂಪೂರ್ಣ ವಿವರ ನೀಡುವುದು) | |

**ಸಂಖ್ಯೆ: ಹಿಂವಕ 307 ಬಿಸಿಎ 2022**

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು